ಪ್ರೊ॥ ಎಲ್.ವ್ಹಿ. ಪಾಟೀಲ

# ಗದಗ ತಾಲೂಕು ಶಾಸನಗಳ ಲಿಪಿಕಾರರು ಹಾಗೂ ರೂವಾರಿಗಳು

ಕರ್ನಾಟಕದ ಶಾಸನಕವಿಗಳನ್ನು ಕುರಿತು ಆರ್. ನರಸಿಂಹಾಚಾರ್ಯರು, ಮೇವುಂಡಿ ಮಲ್ಲಾರಿ, ಶ್ರೀನಿವಾಸ ರಿತ್ತಿ, ಎಂ.ಎಂ. ಕಲಬುರ್ಗಿ ಹಾಗೂ ಇತರ ವಿದ್ವಾಂಸರು ಬರೆದಿರುವರು. ಲಿಪಿಕಾರರನ್ನು ಮತ್ತು ರೂವಾರಿಗಳನ್ನು ಕುರಿತು ಬರೆಯುವಲ್ಲಿ ಕೊರತೆ ಎದ್ದು ಕಾಣುತ್ತದೆ. ಡಾ॥ ಎಂ. ಎಂ. ಕಲಬುರ್ಗಿ ಅವರು ತಮ್ಮ 'ಶಾಸನ ವ್ಯಾಸಂಗ' ಗ್ರಂಥದಲ್ಲಿ ಲಿಪಿಕಾರರನ್ನು ಹಾಗೂ ರೂವಾರಿಗಳನ್ನು ಗುರುತಿಸುವ ಕಾರ್ಯವನ್ನು ಮಾಡಿದ್ದಾರೆ. ಪ್ರಸ್ತುತ ಪ್ರಬಂಧವು ಗದಗ ತಾಲೂಕಿನ ಭೌಗೋಲಿಕ ವ್ಯಾಪ್ತಿಯ ಮಿತಿಯಲ್ಲಿದ್ದ ಶಾಸನಗಳ ಲಿಪಿಕಾರರು ಹಾಗೂ ರೂವಾರಿಗಳನ್ನು ಗುರುತಿಸುವ ಹೆಚ್ಚಿನ ಪ್ರಯತ್ನದ ಉದ್ದೇಶವನ್ನು ಹೊಂದಿದೆ.

ಕುಂತಳದೇಶದಲ್ಲಿ ಬೆಳ್ವೊಲ್‌ನಾಡು ಪ್ರಸಿದ್ಧಿಯನ್ನು ಪಡೆದಿತ್ತು. ಬೆಳ್ವೊಲ್‌ನಾಡು ೩೦೦ ಗ್ರಾಮಗಳನ್ನು ಹೊಂದಿತ್ತು. ಗದಗಿನ ಸಮೀಪದಲ್ಲಿರುವ 'ಅಣ್ಣಿಗೇರಿ' ಈ ನಾಡಿನ ರಾಜಧಾನಿಯಾಗಿತ್ತು. ಗದಗ ತಾಲೂಕು ಈ ಬೆಳ್ವೊಲನಾಡಿನ ದಕ್ಷಿಣಭಾಗದಲ್ಲಿ ಸಮಾವೇಶವಾಗಿತ್ತೆಂದು ತಿಳಿದುಬರುತ್ತದೆ. ಈ ನಾಡಿನಲ್ಲಿ ಕ್ರಿ.ಶ. ೭ ನೆಯ ಶತಮಾನದಿಂದ ಶಾಸನಗಳನ್ನು ಬರೆಯಿಸಿದ ಉಲ್ಲೇಖಗಳು ದೊರೆಯುತ್ತವೆ. ಸಾವಿರಾರು ಶಾಸನಗಳು ಈ ನಾಡಿನಲ್ಲಿ ಬರೆಯಲ್ಪಟ್ಟಿವೆ. ಈ ಶಾಸನಗಳನ್ನು ಬರೆದ ಕವಿಗಳ, ಲಿಪಿಕಾರರ ಹಾಗೂ ರೂವಾರಿಗಳ ವಿಚಾರ ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಬಹುಪಾಲು ಶಾಸನಗಳಲ್ಲಿ ಇವರು ತಮ್ಮ ಹೆಸರನ್ನೇ ಹೇಳಿಕೊಂಡಿಲ್ಲ. ಹೇಳಿಕೊಂಡವರ ಸಂಖ್ಯೆ ತೀರ ವಿರಳ. ಕ್ರಿ.ಶ. ೯ ನೆಯ ಶತಮಾನದಿಂದ ಈಚೆಗೆ ಕವಿಗಳು, ಲಿಪಿಕಾರರು ಹಾಗೂ ರೂವಾರಿಗಳು ತಮ್ಮ ಹೆಸರುಗಳನ್ನು ಹೇಳಿಕೊಳ್ಳಲು ಪ್ರಾರಂಭಿಸಿದ್ದು ಕಂಡುಬರುತ್ತದೆ.

ನಮಗೆ ದೊರೆತ ಲಿಪಿಕಾರರ ಪರಿಚಯವನ್ನು, ಅವರು ಬರೆದ ಶಾಸನದ ಗ್ರಾಮದ ಹೆಸರು, ಕಾಲ ಹಾಗೂ ಲಿಪಿಕಾರರ ಹೆಸರನ್ನು ಅನುಕ್ರಮವಾಗಿ ಈ ಕೆಳಗೆ ಕೊಡಲಾಗಿದೆ.

| ಶಾಸನವಿದ್ದ ಗ್ರಾಮದ ಹೆಸರು | ಕಾಲ | ಲಿಪಿಕಾರರ ಹೆಸರು |
|---|---|---|
| ಚಿಂಚಿಲಿ | ಕ್ರಿ.ಶ. ೯ನೆಯ ಶತಮಾನ | ಪರಮೇಶ್ವರ ಭಟ್ಟರು[1] |
| ಅಸುಂಡಿ | " ೧೦ನೆಯ " | ಲೋಕಯ್ಯ[2] |
| ಹಿರೇಹಂದಿಗೋಳ | " ೧೦ನೆಯ " | ದೇವಯ್ಯ[3] |

1 *South Indian Insccriptions*, Vol. XI, 15
2 *Ibid.*, 34
3 *Ibid.*, 43

| | | |
|---|---|---|
| ನೀಲಗುಂದ | ಕ್ರಿ.ಶ. ೧೦ನೆಯ ಶತಮಾನ | ಕನ್ನೋಜ[4] |
| ಗದಗ | " ೧೧ನೆಯ " | ಕಾಳಿದಾಸಿಮಯ್ಯ[5] |
| ಕೋಟುಮಚಗಿ | " ೧೧ನೆಯ " | ಗೋವಿಂದಭಟ್ಟ[6] |
| ಹೊಂಬಳ | " ೧೧ನೆಯ " | ಮಹಾದೇವಯ್ಯ[7] |
| ಕೋಟುಮಚಗಿ | " ೧೨ನೆಯ " | ಜೋಗಿಶೆಟ್ಟಿ[8] |
| ಚಿಕ್ಕಹಂದಿಗೋಳ | " ೧೨ನೆಯ " | ಬಾಹುಬಲಿಪಂಡಿತದೇವ[9] |

ಮೊದಮೊದಲು ಲಿಪಿಕಾರರು ತಮ್ಮನ್ನು ಕುರಿತು ಹೆಚ್ಚಿನ ವಿವರಗಳನ್ನು ಹೇಳದೆ ಕೇವಲ ತಮ್ಮ ಹೆಸರನ್ನು ಮಾತ್ರ ಹೇಳಿರುವರು. ಕ್ರಿ. ಶ. ೧೦೮೨ ರ ಮತ್ತು ೧೦೮೭ ರ ಕುರ್ತಕೋಟಿ ಗ್ರಾಮದ ಎರಡು ಶಾಸನಗಳನ್ನು ಬರೆದ ಕುಳಕರಣಿ ಮಾಬಳಾಯ್ಯನು ತಾನು ಮಹಾಜನರ ಪಾದಪದ್ಮದ ಮಧುಕರನೆಂದು ಹಾಗೂ ಶಿವಭಕ್ತನೆಂದು ಹೇಳಿಕೊಳ್ಳುವುದರೊಂದಿಗೆ ತನ್ನ ಹಸ್ತಕೌಶಲ ಕುರಿತು ತಿಳಿಸಿದ್ದಾನೆ.[10] ಮುತ್ತಿನಂತಹ ಸುಂದರವಾದ ಅಕ್ಷರಗಳನ್ನು ತಾನು ಬರೆಯುತ್ತಿದ್ದೆನೆಂದು ಚಿಕ್ಕಹಂದಿಗೋಳ ಶಾಸನದಲ್ಲಿ ಬಾಹುಬಲಿಯತಿನಾಥನೆಂಬ ಲಿಪಿಕಾರ ಹೇಳಿಕೊಂಡಿದ್ದಾನೆ.[11]

ಲಿಪಿಕಾರರಂತೆ ರೂವಾರಿಗಳು ಸಹಾ ತಮ್ಮ ಹೆಸರನ್ನು ಹಾಗೂ ಇತರ ವಿವರಗಳನ್ನು ಹೇಳಿರುವದು ಅಪರೂಪ. ತಮ್ಮ ಹೆಸರನ್ನು ಮಾತ್ರ ಹೇಳಿಕೊಂಡ ರೂವಾರಿಗಳು ಕಂಡರಿಸಿದ ಶಾಸನ ಹುಟ್ಟಿದ ಊರಿನ ಹೆಸರಿನೊಂದಿಗೆ ಕಾಲ ಹಾಗೂ ರೂವಾರಿಗಳ ಹೆಸರನ್ನು ಇಲ್ಲಿ ಹೇಳಲಾಗಿದೆ :

| ಶಾಸನವಿದ್ದ ಗ್ರಾಮದ ಹೆಸರು | ಕಾಲ | ರೂವಾರಿಯ ಹೆಸರು |
|---|---|---|
| ಅಸುಂಡಿ | ಕ್ರಿ.ಶ. ೯೨೫ | ಬೆಸಗಯ್ದ ನಾಸಿಂಗ[12] |
| ಕೋಟುಮಚಗಿ | " ೧೦೧೨ | ಜಾವೋಜಂ ಕಂಡರಿಸಿದ[13] |
| ಲಕ್ಕುಂಡಿ | " ೧೦೭೬ | ರೂವಾರಿ ಕೇತೋಜನಬೆಸ[14] |
| ಹೊಸೂರು | " ೧೧೪೭ | ಬಮ್ಮೋಜನ ಕಂಡರಣೆ[15] |
| ಚಿಂಚಲಿ | " ? | ಇನ್ದಗೋಟೆಯ ಬೆಸಂ[16] |

4 *Epigraphia Indica*, Vol. IV, p. 204
5 *SII.*, XI, 48
6 *EI.*, XX, p. 66
7 *SII.*, XI, 84
8 *EI.*, XX, p. 64
9 *SII.*, XV, 128
10 *Ibid.*, XI, 127 & 133
11 *Ibid.*, XV, 128
12 *Ibid.*, XI, 34
13 *EI.*, XX, p. 66
14 *SII.*, XV, 533
15 *Ibid.*, 36
16 *Ibid.*, XI, 15

ಈ ಮೇಲೆ ಉಲ್ಲೇಖಿಸಿದ ರೂವಾರಿಗಳು ಶಾಸನ ಹುಟ್ಟಿದ ಊರಿನವರೇ ಆಗಿರಬಹುದು, ಇಲ್ಲವೆ ಪರ ಊರಿನವರಾಗಿರಬಹುದು. ಸ್ಪಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಈ ಮುಂದೆ ಉಲ್ಲೇಖಿಸಿರುವ ರೂವಾರಿಗಳು ತಮ್ಮ ಗ್ರಾಮದ ಹೆಸರನ್ನು ಹೇಳಿಕೊಂಡಿದ್ದಾರೆ ಹಾಗೂ ತಮ್ಮ ತಂದೆ, ಗುರುಗಳ ಹೆಸರನ್ನು ಸಹಾ ತಿಳಿಸಿದ್ದಾರೆ:

| ಶಾಸನವಿದ್ದ ಗ್ರಾಮದ ಹೆಸರು | ಕಾಲ | ರೂವಾರಿ ಕುರಿತು |
|---|---|---|
| ಕುರ್ತಕೋಟಿ | ಕ್ರಿ. ಶ. ೧೦೦೦ | ಮುಂಟೂರಾಯೋಜನ ಬೆಸ[17] |
| ಹೊಂಬಳ | " ೧೦೪೯ | ಸೂಣ್ಡಿಯ ಸೇವೋಜನ ಕಣ್ಡರಣೆ[18] |
| ಮುಳಗುಂದ | " ೧೦೬೨ | "ಪುರಿಕರನಗರದ ಬಮ್ಮಂ ಸರಸ್ವತಿಗಣದ ದಾಸಿ ಕಣ್ಡ....ನಿರುತ .ಯತಿ....ಸಟಂ ಖಂಡರಿಸಿದಂ ನಾಗವರ್ಮನ ಚ್ಛಾತ್ರಂ"[19] |
| ಚಿಕ್ಕಹಂದಿಗೋಳ | " ೧೦೯೯ | "ಕುನ್ದುರಗೆಯ ಸಿಣ್ಗೋಜನ ಪುತ್ರಂ ರೂವಾರಿ ಕೇತೋಜಂ ಬೆಸಗೆಯ್ದಂ...."[20] |
| ಎಲಿಶಿರೂರು | " ೧೧೩೩ | "ಹೊಸುವುರ ಮೊರಕೇಶ್ವರ ದೇವರ ಓಜನ ಮಗ ಸಿಂಗೋಜನ ಪುತ್ರ ಗಣಪೋಜನ ಬರೆಪಂ...."[21] |
| ಚಿಕ್ಕಹಂದಿಗೋಳ | " ೧೧೭೪ | "ನರೆಯಂಗಲ್ಲ ಬಲ್ಲೋಜನ ಮಗ ಬಡಗಿ ಬಮ್ಮೋಜನ ಕಂಡರಣೆ...."[22] |

ಈ ಮೇಲೆ ಹೇಳಿದ ರೂವಾರಿಗಳೆಲ್ಲರೂ ತಮ್ಮ ಕಾಲದಲ್ಲಿ ಪ್ರಸಿದ್ಧರಾದ ಶಿಲ್ಪಿಗಳಾಗಿದ್ದಿರಬಹುದು. ಅಂತಲೇ ಇವರನ್ನು ಶಾಸನ ಸಿದ್ಧವಾಗಬೇಕಾದ ಊರಿಗೆ ಕರೆಯಿಸಿ ಈ ರೂವಾರಿಗಳಿಂದ ಶಾಸನ ಕಂಡರಣೆ ಕೆಲಸವನ್ನು ಮಾಡಿಸಿದ್ದಾರೆಂದೆನಿಸುತ್ತದೆ. ಈ ರೂವಾರಿಗಳು ಅಕ್ಷರಗಳನ್ನು ಕಂಡರಿಸುವಲ್ಲಿ ವಿಶೇಷ ಹಸ್ತಕೌಶಲ ಮತ್ತು ಶಾಸನ ಫಲಕದ ಶಿಲ್ಪವನ್ನು ಸುಂದರವಾಗಿ ಕೆತ್ತನೆ ಮಾಡುವ ನೈಪುಣ್ಯತೆಯನ್ನು ಹೊಂದಿದವರಾಗಿದ್ದಿರಬಹುದಾಗಿದೆ.

ಕ್ರಿಸ್ತಶಕ ೧೦೦೨ ರ ಗದಗ ಶಾಸನವೊಂದನ್ನು ಕಂಡರಿಸಿದ ಸ್ಯೆವೋಜನೆಂಬುವನು ತನ್ನನ್ನು ರೂವಾರಿ ಬೈರವನೆಂದು ಕರೆದುಕೊಂಡಿದ್ದಾನೆ. ಈ ರೂವಾರಿ ಬೈರವ ಶಿಳಾಕಂಸ ವಿದ್ಯೆಯನ್ನು ಬಲ್ಲವನಾಗಿದ್ದ.[23]

ಕ್ರಿಸ್ತಶಕ ೧೦೮೨ ರ ಕುರ್ತಕೋಟಿ ಗ್ರಾಮದ ಶಾಸನವನ್ನು ಕಂಡರಿಸಿದ 'ಅಯ್ಯಣ' ಎಂಬ ರೂವಾರಿ ತಾನು ಮರದ, ಇಟ್ಟಿಗೆಯ, ದಂತದ, ಚಿತ್ರದ ಕಲೆಗಳಲ್ಲಿ ಚತುರನಾಗಿದ್ದನೆಂದು ಮತ್ತು ಕಮ್ಮಾರವಿಜ್ಞಾನದಲ್ಲಿ ವಿಶ್ವಕರ್ಮನೆಂದು ಪ್ರಸಿದ್ಧಿಯನ್ನು ಹೊಂದಿದನೆಂದು ಹೇಳಿಕೊಂಡಿದ್ದಾನೆ ಈ ರೂವಾರಿ ಶಾಸನವನ್ನು

17 *Ibid.*, 127
18 *Ibid.*, 84
19 *Ibid.*, 97
20 *Ibid.*, 147
21 *Ibid.*, 50
22 *Karnataka Inscriptions*, Vol. V, 38
23 *SII.*, XI, 48

ಶಾಸ್ತ್ರಯುಕ್ತವಾಗಿ ಶಾಸನಫಲಕವನ್ನು ಬೆಸಗೆಯ್ದ ನೆಂದು ಹೇಳಿದ್ದನ್ನು ಗಮನಿಸಿದರೆ, ಶಾಸನ ಕಂಡ ರಣೆಯು ಒಂದು ಕಲೆಯಾಗಿ ಪರಿಣಮಿಸಿತ್ತೆಂದು ತಿಳಿದು ಬರುತ್ತದೆ.[24] 'ಗುಣಪಾ......ರ್ಯ ಪ್ರಣೀತಶಾಸ್ತ್ರ' ಎಂಬ ಗ್ರಂಥವೊಂದು ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ್ದಿರ ಬಹುದೆಂದು 'ಕುರುವತ್ತಿ' ಶಾಸನದಲ್ಲಿ ಉಲ್ಲೇಖವಾದ ಸಂಗತಿಯನ್ನು ಸ್ಮರಿಸಬಹುದಾಗಿದೆ.[25] 'ಅಯ್ಯಣ' ಎಂಬ ರೂವಾರಿ ಶಾಸನ ಕಂಡರಣೆ ಮಾಡಿದ ಕಾಲ ಹಾಗೂ 'ಕುರುವತ್ತಿ' ಶಾಸನದ ಕಾಲ ಎರಡು ದಶಕಗಳ ಅಂತರವನ್ನು ಹೊಂದಿದೆ. 'ಕುರುವತ್ತಿ' ಶಾಸನದ ಕಾಲ ಕ್ರಿ.ಶ. ೧೧೯೯. ಈ ಶಾಸನದಲ್ಲಿ ಉಲ್ಲೇಖವಾದ ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಶಾಸ್ತ್ರಗ್ರಂಥ ಕ್ರಿ.ಶ. ೧೧೮೨ ರ 'ಅಯ್ಯಣ' ಕಾಲದಲ್ಲಿ ಪ್ರಚಲಿತದಲ್ಲಿ ಇದ್ದಿರ ಬಹುದಾಗಿದೆ.

ಬೆನ್ನೂರಿನ ವೀರಗಲ್ಲಿನ ಬರಹವನ್ನು ಸವಣಬಲ್ಲಗೆ ದೇವನ ಮಗನಾದ ನಾಯ್ಕಾವರ್ಮೋಜ ರೂವಾರಿ[26]_ ಕಂಡರಿಸಿದ್ದು, ಈ ರೂವಾರಿಯೇ ವೀರಗಲ್ಲಿನ ಶಿಲ್ಪ ವನ್ನೂ ಸಿದ್ಧಗೊಳಿಸಿರಬಹುದು.

'ಧಾರವಾಡ ಜಿಲ್ಲೆಯ ಶಾಸನಸೂಚಿ' ಪ್ರಕಾರ ಗದಗ ತಾಲೂಕಿನ ೩೨ ಗ್ರಾಮಗಳಲ್ಲಿಯ ೨೧೧ ಶಾಸನ ಗಳನ್ನು ಈ ವರೆಗೆ ಪ್ರಕಟಿಸಿದ ಸಂಗತಿ ವ್ಯಕ್ತವಾಗುತ್ತದೆ. ಇಷ್ಟು ಶಾಸನಗಳಲ್ಲಿ ಕೇವಲ ಬೆರಳು ಮೇಲೆ ಎಣಿಸು ವಷ್ಟು ಲಿಪಿಕಾರರು ಹಾಗೂ ರೂವಾರಿಗಳು ತಮ್ಮ ವಿಷಯ ಕುರಿತು ಉಲ್ಲೇಖಿಸಿದ್ದಾರೆ. ಕವಿಗಳನ್ನೊಳ ಗೊಂಡು ಲಿಪಿಕಾರರು ಹಾಗೂ ರೂವಾರಿಗಳು ನಿರಹಂಕಾರಭಾವದಿಂದ ತಮ್ಮ ಹೆಸರನ್ನು ಹೇಳದೇ ಇರು ವುದು ಕಂಡುಬರುತ್ತದೆ. ಉಲ್ಲೇಖಿಗೊಂಡ ಲಿಪಿ ಕಾರರ ಹಾಗೂ ರೂವಾರಿಗಳ ಸಂಗತಿ ಒಂದೆಡೆ ಬರು ವುದು ಅವಶ್ಯವಿದೆ. ಸಮಗ್ರ ಕರ್ನಾಟಕ ಶಾಸನಗಳನ್ನು ಪರಿಶೀಲಿಸಿ, ಪರಿಶೋಧಿಸಿ ಲಿಪಿಕಾರರ ಹಾಗೂ ರೂವಾರಿಗಳ ಅಧ್ಯಯನ ಆಗಬೇಕಾಗಿದೆ. ಶಾಸನಕವಿ ಗಳ ಚರಿತ್ರೆಯಲ್ಲಿ ಲಿಪಿಕಾರರು ಹಾಗೂ ರೂವಾರಿಗಳ ವಿಷಯಕ್ಕೆ ಸೂಕ್ತ ಪ್ರಾಶಸ್ತ್ಯವನ್ನು ಕೊಡಬೇಕು. ಆಗ ಮಾತ್ರ ಶಾಸನಕವಿಗಳ ಚರಿತ್ರೆ ಸಮಗ್ರವಾಗಲು ಪೂರಕ ವಾಗುತ್ತದೆ.

---

24 *Ibid.*, 127
25 *Ibid.*, IX, 165
26 *Ibid.*, XI, 81